ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ಶಿವಮೊಗ್ಗ ಜಿಲ್ಲೆಯ ಭದ್ರಾವತಿ ಮೈಸೂರು ಕಾರ್ಖಾನೆಯನ್ನು ಆರಂಭಿಸುವ ಬಗ್ಗೆ

ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

090 (495) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಮೈಸೂರು ಕಾಗದ ಕಾರ್ಖಾನೆಯನ್ನು ಮತ್ತೆ ಆರಂಭ ಮಾಡುವ ಬಗ್ಗೆ ಸರ್ಕಾರ ಯೋಚಿಸಿದೆಯೇ ; ಅಥವಾ ಸರ್ಕಾರ ಈ ಕಾರ್ಖಾನೆಯನ್ನು ಆರಂಭ ಮಾಡದಿದ್ದಲ್ಲಿ ಖಾಸಗಿಯವರಿಗೆ ಗುತ್ತಿಗೆ ನೀಡುವ ಬಗ್ಗೆ ಅಥವಾ ಮಾರಾಟ ಮಾಡುವ ಬಗ್ಗೆ ಸರ್ಕಾರದ ಮುಂದೆ ಪ್ರಸ್ತಾವನೆ ಇದೆಯೇ ;

(ಆ) ಈ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ನೌಕರರು ಸ್ವಯಂ ನಿವೃತ್ತಿ ಪಡೆದಿದ್ದಾರೆಯೇ ; ಸ್ವಯಂ ನಿವೃತ್ತಿ ಪಡೆಯದೇ ಇರುವ ನೌಕರರ ಸಂಖ್ಯೆ ಎಷ್ಟು ; ಇವರುಗಳಿಗೆ ಬೇರೆ ಇಲಾಖೆಗೆ ನಿಯೋಜನೆ ಮಾಡುವ ಉದ್ದೇಶವಿದೆಯೇ;

(ಇ) ನಿಯೋಜನೆ ಮಾಡುವ ಉದ್ದೇಶವಿದ್ದಲ್ಲಿ, ಬಾಕಿ ಉಳಿದಿರುವ ಕಾರ್ಮಿಕರನ್ನು ಯಾವಾಗ ನಿಯೋಜನೆ ಮೇಲೆ ಕಳುಹಿಸಲಾಗುವುದು ; ಈ ನಿಯೋಜನೆಗೆ ತಾಂತ್ರಿಕವಾಗಿ ಇರುವ ತೊಂದರೆಗಳೇನು ? (ಸಂಪೂರ್ಣ ವರದಿ ನೀಡುವುದು)